# 93

# ಹೋಮಿಯೋಪಥಿ ಚಿಕಿತ್ಸಾಸಾರ

(ಸಾಮಾನ್ಯ ಕಾಯಿಲೆಗಳಿಗೆ
ಹೋಮಿಯೋಚಿಕಿತ್ಸೆಗಳು)


ಸಂಗ್ರಾಹಕರು:

ಶ್ರೀ। ಬೋಳೂರು ಎಸ್. ರಾವ್,

ಹೋಮಿಯೋಪಥ್, ಮಂಜೇಶ್ವರ.


1956.

ಒಂದಾಣೆ




ಮಾಲೆ

# 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧*ಕೆಪ್ಪಟಿರಾಯ; ೨ ನಾರೀಶ್ವರರು(ದ್ವಿ.ಮುದ್ರಣ); ೩ ಕಳ್ಳನಿಗೆ ಸಂಭಾವನೆ(ದ್ವಿ.ಮುದ್ರಣ) ೪ *ಸದ್ರಿಸುಬ್ಬ; ೫ ಅದ್ಭುತ ತ್ಯಾಗ (ದ್ವಿ.ಮುದ್ರಣ); ೬ *ಚುನಾವಣೆ ಅರ್ಥಾತ್ ಬನಾಹಣೆ; ೭*ಬೀಡಿ ಸೇದಬೇಡಿ ಮತ್ತು ಆ ಮಗು; ೮*ಇಂಗ್ಲಿಷ್-ಕನ್ನಡ ಅರ್ಥಕೋಶ; ೯ ಲಂಚಕ್ಕೆ ಸಂಚಕಾರ (ದ್ವಿ.ಮುದ್ರಣ); ೧೦ *ಟಿಶ್ಯೂ ಔಷಧಿಗಳ ಕೈಪಿಡಿ; ೧೧ *ಶ್ರೀ ಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ); ೧೨ ಜೀವದ ಮೌಲ್ಯ ಮತ್ತು ಇತರ ಕಥೆಗಳು; ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಬಿಗೆ ಬಾಸಿಂಗ (ದ್ವಿ.ಮುದ್ರಣ); ೧೬ ವೇಣೂರಿನ ಗತವೈಭವ(ದ್ವಿ.ಮುದ್ರಣ); ೧೭ ಒಗಟುಗಳು (ದ್ವಿ. ಮುದ್ರಣ); ೧೮ ಜಗಳಗಂಟಿ ಮತ್ತು ಇತರ ಕಥೆಗಳು; ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ-I(ದ್ವಿ.ಮುದ್ರಣ); ೨೨ ತಿರುಕ್ಕುರಲ್ (ದ್ವಿ.ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ-II (ದ್ವಿ.ಮುದ್ರಣ); ೨೫ ಧೈರ್ಯ ಮತ್ತು ಇತರ ಸತ್ಯ ಕಥೆಗಳು; ೨೬ ಮಾರಾವತಾರ(ದ್ವಿ.ಮುದ್ರಣ); ೨೭ ಹಾಸವಿಲಾಸ; ೨೮ ಸತ್ಯವಂತ ಬಾಬಿ [ದ್ವಿ.ಮುದ್ರಣ]; ೨೯ ಜಾಣ್ಮೆಯ ಒಗಟುಗಳು ೩೧ ಜಾತಕ ಕಥೆಗಳು; ೩೧ ಕಾರ್ಕಳದ ಚರಿತ್ರೆ; ೩೨ ಮರ್ಜಿ; ೩೩ ದರ್ಶನದ ಕಥೆಗಳು; ೩೪ ಅಳುವಿನ ಹೊಳೆ ಮತ್ತು ಕೇಶವಭೂಪ; ೩೫ ಶರಾಬಿನ ಪೀಪಾಯಿಗಳು; ೩೬ ಉಪದೇಶ ಶತಕ; ೩೭ ನಿಮಗೆ ಗೊತ್ತಿದೆಯೇ?; ೩೮ ಚತುರ ಚಮತ್ಕಾರ; ೩೯ ಸತೀ ಸಾವಿತ್ರಿ (ದ್ವಿ.ಮುದ್ರಣ); ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು(ದ್ವಿ.ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾಷಿತ; ೪೬ ೧೮೫೭ರ ಸಿಪಾಯಿದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾಜ್ಞಾನಕೋಶ; ೫೦ ಪಂಡಿತನ ಪಿಟೀಲು; ೫೧ ಭೋಗಯಾತ್ರೆ; ೫೨ ಸಂಗ್ರಾಮಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ; ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಬಿಟ್ಟ ಧಿಟ್ಟ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯಮ್; ೬೪ ಲೌಕಿಕ ನ್ಯಾಯಗಳು; ೬೫ ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲ (ದ್ವಿ.ಮುದ್ರಣ; ೬೮ ಕರುಣೆ ಮತ್ತು ಇತರ ಕಥೆಗಳು; ೬೯ ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ಉ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯದಲ್ಲಿ...; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಪಠನ ಮತ್ತು ಇತರ ಕಥೆಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧ ಆದಿಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ; ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ಅರ್ಥ ಸಹಿತ); ೮೩ ಬೆಡಗಿನ ನಾಡು ಕೊಡಗು; ೮೪ ಆಮೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಧುರೆಗೆ; ೮೬ ಸತೀ ವೃಂದಾ; ೮೭ ಗೌತಮನ ಗೃಹತ್ಯಾಗ; ೮೮ ಗೃಹವೈದ್ಯ; ೮೯ ನಮ್ಮ ನಾಟಕಗಳು; ೯೦ ಜಾನಪದ ಕಥೆಗಳು; ೯೧ ಕೆಲವು ಉಪಯುಕ್ತ ಸಲಹೆಗಳು. ೯೨ ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ. ೯೩ ಹೋಮಿಯೋಪಥಿ-ಚಿಕಿತ್ಸಾಸಾರ.

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧.

# ಹೊಮಿಯೋಪಥಿ—ಚಿಕಿತ್ಸಾಸಾರ

(ಸಾಮಾನ್ಯ ಕಾಯಿಲೆಗಳಿಗೆ ಹೊಮಿಯೊಪಥಿ ಔಷಧ ಕ್ರಮ.)

*********

ಹೊಮಿಯೊಪಥಿ ಚಿಕಿತ್ಸಾಕ್ರಮವನ್ನು ಜರ್ಮನಿಯ ಪ್ರಸಿದ್ಧ ವೈದ್ಯರಾದ ಸಾಮುವೆಲ್ ಹೆನ್‌ಮನ್ ಎಂಬವರು ಕಂಡುಹಿಡಿದರು. "ಸಮಾನವು ಸಮಾನದಿಂದ ವಾಸಿಯಾಗಲಿ" ಎಂಬ ತತ್ವದ ಮೇಲೆ ಈ ಚಿಕಿತ್ಸಾಕ್ರಮವು ಹೊಂದಿಕೊಂಡಿದೆ.

ಪ್ರತಿ ರೋಗದಲ್ಲಿ, ಅದರ ಸ್ವಭಾವಕ್ಕನುಸಾರವಾಗಿ ಕೆಲವು ವಿಶಿಷ್ಟವಾದ ಲಕ್ಷಣಗಳು ದೇಹದಲ್ಲಿ ಕಾಣಬರುವುವು. ಆ ಲಕ್ಷಣಗಳೆಲ್ಲವೂ, ನಮ್ಮ ಶರೀರವು, ಆ ರೋಗವನ್ನು ಹೊರದೂಡಿ, ಆರೋಗ್ಯವನ್ನು ಉಂಟುಮಾಡಲು ಪ್ರಯತ್ನಿಸುವ ಲಕ್ಷಣಗಳಾಗಿವೆ. ಹೊಮಿಯೊಪಥಿ ಚಿಕಿತ್ಸಾಕ್ರಮದಲ್ಲಿ, ರೋಗದ ಪರಿಣಾಮವಾಗಿ, ಶರೀರದಲ್ಲಿ ತೋರಿಬರುವ ಲಕ್ಷಣಗಳು ಮುಖ್ಯವಾದುವು. ರೋಗದ ನಿವಾರಣೆಗಾಗಿ, ರೋಗಿಯ ಶರೀರದಲ್ಲಿ ತೋರಿಬರುವ ಲಕ್ಷಣಗಳನ್ನೇ ಉಂಟುಮಾಡುವ ಔಷಧಗಳನ್ನು ಹೆಕ್ಕಿತೆಗೆದು ಚಿಕಿತ್ಸೆಮಾಡುವುದು.

ಹೊಮಿಯೊ ಔಷಧಗಳು ಬಹಳ ಅಲ್ಪಪ್ರಮಾಣದ ತೆಳುವಿಕೆಗಳಲ್ಲಿ ಕೊಡಲ್ಪಡುವುವು. ಆದುದರಿಂದ ಎಂದಿಗೂ ಕೆಡುಕು ಬರುವುದಿಲ್ಲ. ರೋಗವು ಪ್ರಬಲವಾಗುವುದಿಲ್ಲ. ರೋಗದ ಅವಧಿಯನ್ನೂ, ತೀವ್ರತೆಯನ್ನೂ ಕಡಿಮೆಮಾಡಿ, ಬಹಳ ಆಶ್ಚರ್ಯಕರವಾದ ರೀತಿಯಲ್ಲಿ ಗುಣಪಡಿಸುತ್ತದೆ. ಹೊಮಿಯೋ ಔಷಧಿಗಳ ಬೆಲೆ ಕಡಮೆ. ಸೇವಿಸುವುದಕ್ಕೆ ರುಚಿಕರವಾಗಿಯೂ, ಅನುಕೂಲವಾಗಿಯೂ ದೊರೆಯುತ್ತವೆ.

ಹೊಮಿಯೋ ಚಿಕಿತ್ಸಾಕ್ರಮದಲ್ಲಿ ಅಸಂಖ್ಯಾತ ಔಷಧಿಗಳು ಉಪಯೋಗಿಸಲ್ಪಟ್ಟರೂ, ಸಾಮಾನ್ಯ ನಿತ್ಯದ ಕಾಯಿಲೆಗಳಿಗೆ ಕೆಲವೇ ಔಷಧಿಗಳು ಸಾಕಾಗುತ್ತವೆ. ಔಷಧಿಗಳು ಹುಡಿ, ಮಾತ್ರೆ ಮತ್ತು ತೆಳುವಿಕೆಯ ರೂಪದಲ್ಲಿ ದೊರೆಯುತ್ತವೆ. ಹುಡಿ ಮತ್ತು ಮಾತ್ರೆಗಳನ್ನು ಬಾಯಲ್ಲಿ

ಹಾಕಿ ನುಂಗಬೇಕು. ತೆಳುವಿಕೆಯನ್ನು ನೀರಿನೊಡನೆ ಅಥವಾ ಹಾಲಿನ ಸಕ್ಕರೆಯೊಡನೆ ಸೇವಿಸಬೇಕು.

ಔಷಧಿಗಳ ಪ್ರಮಾಣ: –(i) ಸಣ್ಣ ಮಕ್ಕಳಿಗೆ— ಸಾಧಾರಣ ಪ್ರಾಯ 3ರಿಂದ ಒಳಗೆ—½ ಗ್ರೈನ್, ಹುಡಿ ಅಥವಾ 1 ಗುಳಿಗೆ ಅಥವಾ ¼ ಬಿಂದು.

[ii] ಮಕ್ಕಳಿಗೆ— ಪ್ರಾಯ 3ರಿಂದ 14ರ ಒಳಗೆ—1 ಗ್ರೈನ್ ಹುಡಿ ಅಥವಾ 2 ಗುಳಿಗೆ ಅಥವಾ ½ ಬಿಂದು.

(iii) ದೊಡ್ಡವರಿಗೆ—2-4 ಗ್ರೈನ್ ಹುಡಿ ಅಥವಾ 4 ಗುಳಿಗೆ ಅಥವಾ 1 ಬಿಂದು.

ಔಷಧಿಗಳನ್ನು ತೀವ್ರವಾದ ರೋಗಗಳಲ್ಲಿ ಪ್ರತಿ 1, 2, 3 ಅಥವಾ 5 ಗಂಟೆಗೊಂದಾವರ್ತಿ ಕೊಡುವುದು. ದೀರ್ಘಕಾಲದ ರೋಗಗಳಲ್ಲಿ ವಾರಕ್ಕೊಂದು ಸರ್ತಿ ಕೊಡುವುದು; ಸಾಂಕ್ರಾಮಿಕ ರೋಗಗಳಲ್ಲಿ ಪ್ರತಿ ½ ಗಂಟೆಗೊಂದಾವರ್ತಿ ಕೊಡುತ್ತಾ ಬರುವುದು. ಗುಣಮುಖ ಬಂದ ಹಾಗೆಲ್ಲಾ ಔಷಧಗಳ ಪುನರಾವರ್ತನೆಯು ಅವಧಿಯನ್ನು ಹೆಚ್ಚಿಸುತ್ತಾ ಬರುವುದು.

ತೀವ್ರ ರೋಗಗಳಲ್ಲಿ 3x ಅಥವಾ 6xನ ತೆಳುವಿಕೆಗಳಲ್ಲಿ ಔಷಧಿಗಳನ್ನು ಕೊಟ್ಟಲ್ಲಿ ಹೆಚ್ಚಿನ ಪರಿಣಾಮಕಾರಿ; ಸಾಧಾರಣ ಚಿಕಿತ್ಸೆಗಳಿಗೆ 30xನ ತೆಳುವಿಕೆಯೂ, ದೀರ್ಘ ರೋಗಗಳಲ್ಲಿ 200xನ ತೆಳುವಿಕೆಯೂ ಹಿತಕರ.

ಹೋಮಿಯೋ ಔಷಧಿಗಳನ್ನು ತೆಗೆದುಕೊಳ್ಳುವ ಸಮಯ, ರೀತಿ ಮತ್ತು ನಿಯಮಗಳು:—

(1) ಔಷಧಿಗಳನ್ನು ತೆಗೆದುಕೊಳ್ಳುವ ಮೊದಲು ಬಾಯಿಯನ್ನು ಚೆನ್ನಾಗಿ ಮುಕ್ಕುಳಿಸಿ ತೊಳೆಯಿರಿ.

(2) ಔಷಧಿಯನ್ನು ಖಾಲಿ ಹೊಟ್ಟೆಯಲ್ಲಿರುವಾಗ ತೆಗೆದುಕೊಂಡಲ್ಲಿ ಹೆಚ್ಚಿನ ಪರಿಣಾಮಕಾರಿ. ಆದುದರಿಂದ ಊಟದ ಒಂದೆರಡು ಗಂಟೆಯ ಮೊದಲು, ಅಥವಾ ಅನಂತರ ಔಷಧಿಗಳನ್ನು ತೆಗೆದುಕೊಳ್ಳಬೇಕು.

(3) ತೀವ್ರವಾದ ಮತ್ತು ಕಠಿಣವಾದ ಪ್ರಸಂಗಗಳಲ್ಲಿ ಯಾವ ಆತಂಕ ವಿಲ್ಲದೆ ಯಾವಾಗಲೂ ತೆಗೆದುಕೊಳ್ಳಬಹುದು.

(4) ನಿದ್ರಿತಾವಸ್ಥೆಯಲ್ಲಿ ರೋಗಿಯು ಇದ್ದಾಗ, ಔಷಧಿ ಕೊಡುವುದಕ್ಕೆ ಎಚ್ಚರಿಸಬಾರದು.

(5) ಔಷಧಿಗಳನ್ನು ಆಗಾಗ್ಗೆ ಕೊಡಬೇಕಾದ ಪ್ರಸಂಗದಲ್ಲಿ, ಈ ಕೆಳಗೆ ನಮೂದಿಸಿದ ರೀತಿಯಲ್ಲಿ ಔಷಧಿಗಳನ್ನು ಕೊಡುವುದು:—

(i) ಬೆಳಗ್ಗೆ--ಬರೀ ಹೊಟ್ಟೆಯಲ್ಲಿದ್ದಾಗ.

(ii) ಮಧ್ಯಾಹ್ನ-ಊಟದ ½ ಗಂಟೆಯ ಮೊದಲು.

(iii) ಸಂಜೆ—ಆಹಾರದ ½ ಗಂಟೆ ಮೊದಲು.

(iv) ರಾತ್ರಿ--ಮಲಗಲು ತೆರಳುವ ಮೊದಲು.

(6) ಚಿಕ್ಕ ಮಕ್ಕಳಿಗೆ ನೀರಿನೊಡನೆ ಸೇರಿಸಿ ಕುಡಿಸುವುದು.

(7) ಹೋಮಿಯೋ ಔಷಧಿಯೊಡನೆ ಬೇರಾವ ಕ್ರಮದ ಔಷಧಿಯನ್ನು ಸೇವಿಸಬಾರದು.

(8) ಸೌಮ್ಯ ಆಹಾರ ಪದಾರ್ಥಗಳನ್ನು ಸೇವಿಸಬೇಕು. ಮೆಣಸು, ಸಾಂಬಾರ ಜೀನಸು, ವೀಳ್ಯದೆಲೆ, ಬೀಡಿ, ಸಿಗರೇಟ್ ಇತ್ಯಾದಿಗಳನ್ನು ಸೇವಿಸಬಾರದು.

(9) ಹಣ್ಣುಹಂಪಲುಗಳನ್ನೂ, ತರಕಾರಿಗಳನ್ನೂ ಹೆಚ್ಚಾಗಿ ಸೇವಿಸುವುದು.

o o o o o o o o

ಸಾಮಾನ್ಯ ಕಾಯಿಲೆಗಳಿಗೆ ಹೋಮಿಯೋ-ಚಿಕಿತ್ಸೆಯನ್ನು ಈ ಕೆಳಗೆ ಕೊಡಲಾಗಿದೆ. ಔಷಧಿಗಳ ತೆಳುವಿಕೆಯನ್ನು ರೋಗದ ತೀವ್ರತೆಗನುಸಾರವಾಗಿ ಚುನಾಯಿಸತಕ್ಕದ್ದು. ಹೆಚ್ಚಾಗಿ, ಸರ್ವಸಾಮಾನ್ಯವಾಗಿ ಉಪಯೋಗಿಸಲ್ಪಡುವ ತೆಳುವಿಕೆಗಳನ್ನೂ ಅಲ್ಲಲ್ಲೇ ಸೂಚಿಸಲಾಗಿದೆ.

## 1. ಕುರು (Boils)

(i) ಸಿಡಿತಕ್ಕೆ--ಬೆಲಡೋನಾ 6x.

(ii) ಕೀವು ಹುಟ್ಟಿ ಒಡೆಯುವ ಮೊದಲು--ಹೀಪರ್ ಸಲ್ಫ್ಯೂರಿಸ್ 6x. ಎರಡನ್ನೂ ಬದಲಿಸಿ, ಬದಲಿಸಿ, 2—3 ಗಂಟೆಗೊಂದಾವರ್ತಿ ಕೊಡುವುದು.

(iii) ಕುರುವಾಗುವುದನ್ನು ತಡೆಗಟ್ಟಲು--ಸಲ್ಫರ್ 30x.

## 2. ಗಂಟಲು ನೆಗಡಿ (Bronchitis)

(i) ಆರಂಭದಲ್ಲಿ--ಎಕೊನಿಟಂ 6x--30x.

(ii) ಎದೆಭಾರ, ಶ್ವಾಸ ಕಟ್ಟಿದಂತಾಗುವುದು:--ಬ್ರಾಯೋನಿಯಾ 6x. (i) ಮತ್ತು (ii)ನ್ನು ಬದಲಿಸಿ ಕೊಡುವುದು.

(iii) ಕಫವಿದ್ದು ಎದೆಯಲ್ಲಿ ತಂತಿ ಎಳೆದಂತೆಯಿರುವ ಕೆಮ್ಮಿಗೆ—ಹೀಪರ್ ಸಲ್ಫ್ಯೂರಿಸ್ 6x;--ಇದನ್ನೇ ರೋಗದ ತಡೆಯಾಗಿಯೂ ಕೊಡಬಹುದು.

ಅಥವಾ ಪ್ರಾರಂಭದಲ್ಲಿ ಬ್ರಾಯೋನಿಯಾ 6x ಮತ್ತು ಇಪೆಕ್‌ಕ್ವಾನಾ 6x; ಅನಂತರ ಬ್ರಾಯೋನಿಯಾ 6x ಮತ್ತು ಪಲ್ಸಟಿಲ್ಲಾ 6x ಬದಲಿಸಿ ಬದಲಿಸಿ ಕೊಟ್ಟಲ್ಲಿ ಹೆಚ್ಚಿನ ಪರಿಣಾಮಕಾರಿ.

## 3. ತಾಗಿದ ಅಥವಾ ಉಳುಕಿದ ನೋವು (Bruises and Sprains).

(i) ಹೊಟ್ಟೆಗೆ ಆರ್ನಿಕ 30x; ಮತ್ತು ಆರ್ನಿಕ ಬಾಹ್ಯ ಔಷಧವನ್ನು ಪೆಟ್ಟಾದ ಭಾಗದ ಮೇಲೆ ಹಚ್ಚುವುದು.

## 4. ಸುಟ್ಟ ಅಥವಾ ಬೆಂದ ಗಾಯ(Burns and Scalds).

(i) ಜ್ವರವಿದ್ದರೆ—ಎಕೊನಿಟಂ 6-30x ಮತ್ತು ಉರಿ ತಗ್ಗಿಸಲು—ಕೆಂಥಾರಿಸ್ 6-30x.

ಗಾಯದ ಮೇಲೆ ಕೆಂಥಾರಿಸ್ ಮಿಶ್ರಿತ ನೀರು ಹಚ್ಚುವುದು.

## 5. ಕೋಟಲೆ ಅಥವಾ ಸೀತಾಳೆ (Chicken-Pox).

(i) ಪ್ರಾರಂಭದಲ್ಲಿ—ಎಕೊನಿಟಂ 30x.

(ii) ಅನಂತರ ಎಲ್ಲಾ ಸಂಗತಿಗಳಲ್ಲಿ—ರ್ಹುಸ್‌ಟೋಕ್ಸ್-6-30x.

(iii) ಕೆಮ್ಮು ಇದ್ದರೆ—ರ್ಹುಸ್‌ನೊಡನೆ ಬದಲಿಸಿ ಬ್ರಾಯೋನಿಯಾ 6-30x-ಕೊಡುವುದು.

## 6. ನೆಗಡಿ-ಶೀತ (Cold).

(i) ಜ್ವರದ ಲಕ್ಷಣವಿದ್ದರೆ—ಅಥವಾ ಗಾಳಿಗೆ ಮೈಯೊಡ್ಡಿದ್ದರಿಂದ ಶೀತ—ಎಕೊನಿಟಂ 30x.

(ii) ಮಕ್ಕಳ ನೆಗಡಿಗೆ ಕೆಮೊಮಿಲಾ 6-30x.

(iii) ಶೀತ ವಾಸಿಯಾಗುವುದಕ್ಕೆ—ಕಲ್ಕೆರಿಯಾ ಕಾರ್ಬೊನಿಕಾ 6-30x.

(iv) ಮೂಗನ್ನು ಕೊರೆಯುವ ಸಿಂಬಳವಿದ್ದರೆ-ಆರ್ಸನಿಕಂ 0-30x; ಇತರ ಸಹಾಯಕ ಔಷಧಿಗಳು—ಡುಲ್ಕಮರಾ, ನಕ್ಸ್‌ವೊಮಿಕಾ; ಪಲ್ಸಟಿಲಾ.

(v) ದೀರ್ಘಕಾಲದ ಶೀತ--ಕಾಲಿಬಿಚ್ (Kali-Bich) 30x.

## 7. ಹೊಟ್ಟೆ ನೋವು (Colic).

(i) ಮಕ್ಕಳಿಗೆ ಆಗುವ ಬೇನೆಗೆ—ಕೆಮೊಮಿಲಾ 6-30x; ಅನಂತರ ನಕ್ಸ್‌ವೊಮಿಕಾ 30x.

(ii) ಕಠಿಣವಾದ, ಬಗ್ಗುವಂತೆ ಮಾಡುವ ಉದರಶೂಲೆಗೆ-ಕೊಲೊಸಿಂತ್ 30x.

(iii) ಹುಳದ ಉಪದ್ರದಿಂದ ಹೊಟ್ಟೆನೋವಿಗೆ—ಸೀನ 30x.

ಇತರ ಸಹಾಯಕ ಔಷಧಗಳು:—ಮ್ಯಾಗ್‌ಪೋಸ್.

## 8. ಬಾಲಗ್ರಹ-ಮಕ್ಕಳ ಚೇಷ್ಟೆ (Convulsions).

(i) ಮುಖ್ಯ ಔಷಧ—ಬೆಲಡೋನಾ 6-30x.

(ii) ಶೀತ, ಉದರಶೂಲೆ ಕಾರಣವಾಗಿದ್ದರೆ-ಕೆಮೊಮಿಲಾ 6-30x.

(iii) ಹುಳದ ಉಪದ್ರದಿಂದ--ಸೀನ 6-30x.

ಇತರ ಸಹಾಯಕ ಔಷಧಗಳು: ಕೂಪ್ರಮ್ (Ceprom-Met) ಪಸ್ಸಿಫ್ಲೋರಾ (Passiflora).

## 9. ಮಲಬದ್ಧತೆ (Constipation).

(i) ಅಜೀರ್ಣದ ತಲೆಸಿಡಿತವಿದ್ದರೆ--ನಕ್ಸ್‌ವೊಮಿಕಾ 30x-ಬೆಳಗ್ಗೆ ಮತ್ತು ರಾತ್ರಿ.

(ii) ದೀರ್ಘಕಾಲದ ಮತ್ತು ಮೂಲವ್ಯಾಧಿಯ ಕುರುಹುಗಳು ಇದ್ದರೆ—ಸಲ್ಫರ್ 30x (i) ಮತ್ತು (ii) ನ್ನೂ ಬದಲಿಸಿ ಬದಲಿಸಿ ತೆಗೆದುಕೊಂಡಲ್ಲಿ ಹೆಚ್ಚಿನ ಪರಿಣಾಮಕಾರಿ.

(iii) ಗರ್ಭಿಣಿಯರ ಮಲಬದ್ಧತೆ--ಸೇಪಿಯಾ 30x.

ಇತರ ಸಹಾಯಕ ಔಷಧಗಳು: ಬ್ರಾಯೋನಿಯಾ; ಲ್ಯಾಕೋಪೊಡಿಯಂ.

## 10. ಕೆಮ್ಮು (Cough).

( i ) ಬಹಳ ಕಫ ಹೋಗುವ ಸಡಿಲು ಕೆಮ್ಮು—ಹೀಪರ್ ಸಲ್ಫ್ಯುರಿಸ್ 6-30x.

( ii ) ಕಠಿಣವಾದ ಎದೆನೋವು, ಪರಿಕೆಯಿರುವ ಕೆಮ್ಮು—ಬ್ರಾಯೋನಿಯಾ--6-30x.

(iii) ಮಕ್ಕಳ ರಾತ್ರಿಯ ಕೆಮ್ಮಿಗೆ—ಕೆಮೊಮಿಲಾ 6-30x.

(iv) ಆಗಾಗ್ಗೆ ದಮ್ಮು ಕಟ್ಟಿ ಬರುವ ಕಪ್ಪೆ ಕೆಮ್ಮಿಗೆ—ಮ್ಯಾಗ್ ಪೋಸ್ 6x.

( v ) ರಾತ್ರಿಕಾಲದಲ್ಲಿ ಹೆಚ್ಚಾಗಿ ಬರುವ ಎಲ್ಲಾ ತರದ ಕೆಮ್ಮಿಗೆ—ಹೈಯೋಸ್ಕ್ಯಾಮಸ್ (Hyoscyamus) 6-30x.

ಇತರ ಸಹಾಯಕ ಔಷಧಗಳು,—ಡ್ರೊಸಿರಾ; ಇಪೆಕ್ಯಾನಾ; ಹೆಮಮೆಲಿಸ್; ಸ್ಪೊಂಜಿಯಾ.

## 11. ಅತಿಸಾರ (Diarrheoa).

( i ) ಮಕ್ಕಳ ಅತಿಸಾರಕ್ಕೆ--ಕೆಮೊಮಿಲಾ--3-6x.

( ii ) ನೋವಿದ್ದರೆ--ಕೊಲೊ ಸಿಂತಿಸ್ 3-6x.

(iii) ಆಹಾರ ಜೀರ್ಣವಾಗದೆ ವಿಸರ್ಜಿಸಲ್ಪಟ್ಟರೆ--ಚೈನಾ-30x.

(iv) ಎಲ್ಲಾ ಸಂಗತಿಗಳಲ್ಲಿ—ಪೆರಂಪೋಸ್ ಮತ್ತು ಕಾಲಿಮ್ಯೂರ್ 6x ಸರ್ತಿ ಪ್ರಕಾರ ಬದಲಿಸಿ ಕೊಟ್ಟಲ್ಲಿ ಗುಣಕರ.

( v ) ಪ್ರಾರಂಭದಲ್ಲಿ ಸಾಮಾನ್ಯತರದ್ದಕ್ಕೆ—ಆರ್ಸೆನಿಕಂ ಆಲ್ಬ-6-30x; ಇತರ ಸಹಾಯಕ ಔಷಧಗಳು- ಪೊಡೊಫೈಲಂ; ಮ್ಯಾಗ್ ಪೋಸ್.

## 12. ಆಮಶಂಕೆ (Dysentry).

( i ) ಪ್ರಾರಂಭದಲ್ಲಿ--ಇಪೆಕ್ಯಾನಾ 30x ಮತ್ತು ಮರ್ಕ್ಯೂರಿಯಸ್ ಸೋಲ್--30xನ್ನು ಬದಲಿಸಿ, ಸರ್ತಿ ಪ್ರಕಾರ ಕೊಟ್ಟಲ್ಲಿ ಗುಣಕರ.

(ii) ಅತಿರೇಕ ನಿತ್ರಾಣವಿದ್ದರೆ—ಆರ್ಸನಿಕಂ 30x.
(iii) ಹೆಚ್ಚು ನೋವಿದ್ದರೆ—ಕೊಲೊಸಿಂತಿಸ್ 30x.
(iv) ಅಸ್ವಸ್ಥವು ತಿರುಗಿ ಬಾರದಂತೆ-ತಡೆ-ಸಲ್ಫರ್ 30x.

ಇತರ ಸಹಾಯಕ ಔಷಧಗಳು:—ಎಕೊನಿಟಂ; ಎಲ್ಯೊ (Aloe) ಥೂಜ್ (Thuj).

### 13. ಕಿವಿ ನೋವು (Ear-Ache).

( i ) ಎಕೊನಿಟಂ 3-30x ಮತ್ತು ಬೆಲಡೋನಾ 3-30xಗಳನ್ನು ಬದಲಿಸಿ, ಸರ್ತಿ ಪ್ರಕಾರ ಕೊಡುವುದು.
( ii ) ಮಕ್ಕಳ ಕಿವಿನೋವಿಗೆ—ಕೆಮೊಮಿಲಾ 6x.
(iii) ಸ್ತ್ರೀಯರ ಕಿವಿನೋವಿಗೆ—ಪಲ್ಸಟಿಲಾ 6-30x.
(iv) ಕಿವಿಯೊಳಗೆ ಮುಲ್ಲೈನ್ ಎಣ್ಣೆ(Mullein-oil)ಹಾಕುವುದು.

### 14. ಜ್ವರ (Fever).

( i ) ಸಾಮಾನ್ಯ ಮತ್ತು ಸ್ಫೋಟಕ ರೋಗಗಳಿಗೆ—ಜ್ವರಕ್ಕೆ ಎಕೊನಿಟಂ ಮತ್ತು ಬೆಲಡೋನಾ 3-30x—ಬದಲಿಸಿಕೊಡುವುದು.
(ii) ಜ್ವರವು ನಿಲ್ಲದೆ, ಯಾವುದಾದರೂ ಅಂತರೀಯ ಇಂದ್ರಿಯಕ್ಕೆ ಬೇಗು ಇದ್ದರೆ—ಸಲ್ಫರ್ 3-30x.
(iii) ವಿಷಮ ಜ್ವರಕ್ಕೆ—ಜೆಪ್ಸಿಸಿಯಾ, ಬೆಲಡೋನಾ, ಪೆರಂಪೋಸ್ ಬದಲಿಸಿ ಸರ್ತಿಪ್ರಕಾರ ಕೊಡುವುದು. 3-30x.
(iv) ಶೋಣಿತ ವಾತಕ್ಕೆ—ಎಕೊನಿಟಂ ಮತ್ತು ರ್ಹೂಸ್ ಟೋಕ್ಸ್ 3-30x.
(v) ನಿಮೋನಿಯಾ ಜ್ವರಕ್ಕೆ—ಎಕೊನಿಟಂ ಮತ್ತು ಬ್ರಾಯೊನಿಯಾ 6-30x ಅಥವಾ ಪೆರಂಪೋಸ್ ಮತ್ತು ಕಾಲಿಮ್ಯೂರ್ 6-30x. ಸರ್ತಿ ಪ್ರಕಾರ ಬದಲಿಸಿ ಕೊಡುವುದು.

### 15. ತಲೆಸಿಡಿತ (Headache)

(i) ಬಡಿಯುವ, ಸಿಡಿಯುವ ತಲೆನೋವು—ಬೆಲಡೋನಾ 30x.
(ii) ಜಠರದ ಆಕ್ರಮದಿಂದ—ನಕ್ಸ್‌ವೊಮಿಕಾ 30x.

(iii) ಸ್ತ್ರೀಯರ ತಲೆಸಿಡಿತ—ಪಲ್ಸಟಿಲಾ 30x. ಅಥವಾ ಸಿಮಿಸಿ ಫ್ಯೂಗಾ 6-30x.

(iv) ತಲೆಯ ನರಗಳ ನೋವು—ಎಡಭಾಗದಲ್ಲಿ-ಸ್ಪಿಜಿಲಿಯಾ 6-30x. ಬಲಭಾಗದಲ್ಲಿ-ಸಿಲೀಸಿಯಾ 6-30x.

(v) ಪಿತ್ತದ ವಿಕಾರದಿಂದ—ಮರ್ಕ್ಯೂರಿಯಸ್ ಸೋಲ್ 30x.

(vi) ಚಲನೆಯಿಂದ ಹೆಚ್ಚಾಗುವಂತಾದ್ದು—ಬ್ರಾಯೋನಿಯಾ 30-x

(vii) ದಿನನಿತ್ಯದ ನೋವಿಗೆ—ಜಿಂಕಮ್ (Zincum).

(viii) ತಲೆಸಿಡಿತದಿಂದ ವಾಂತಿಯಿದ್ದರೆ—ವಿರಾಟ್ರಮ್ ವಿರೈಡ್ ಅಥವಾ ಐರಿಸ್ (Iris).

(ix) ಪೆಟ್ಟಿನ ದೆಸೆಯಿಂದ—ಆರ್ನಿಕ 30x.

(x) ತಲೆತಿರುಗುವಿಕೆ ಇದ್ದರೆ—ಜೆಲ್ಸೆಮಿಯಂ 6-30x.

## 16. ಅಜೀರ್ಣ (Indigestion)

(i) ವ್ಯಾಯಾಮವಿಲ್ಲದೆ ಮಲಬದ್ಧತೆಗೆ ಕಾರಣ-ನಕ್ಸವೊಮಿಕಾ 30x.

(ii) ಮಕ್ಕಳ ಅಥವಾ ಸ್ತ್ರೀಯರ ಅಜೀರ್ಣಕ್ಕೆ—ಪಲ್ಸಟಿಲಾ 30x.

(iii) ತೈಲ ಪದಾರ್ಥಗಳ ಸೇವನೆಯಿಂದಾದರೆ—ಪಲ್ಸಟಿಲಾ 30x.

(iv) ಹುಳಿತೇಗು ಇದ್ದಲ್ಲಿ—ಕಾರ್ಬೋವೆಜಿಟೆಬಿಲಿಸ್ 30x.

(v) ಪಿತ್ತದ ಲಕ್ಷಣಗಳಿದ್ದರೆ—ಹೀಪರ್ ಸಲ್ಫ್ಯೂರಿಸ್ 30x.

## 17. ಮಕ್ಕಳ ವಿಷಮಜ್ವರ (Infantile-Remittent-Fever)

(i) ಎಲ್ಲಾ ಸಂದರ್ಭಗಳಲ್ಲಿ—ಚೈನಾ 6-30x.

(ii) ಬಿಡದೆ ಬರುವ ಜ್ವರಕ್ಕೆ—ಜೆಲ್ಸೆಮಿಯಂ 6-30x.

(iii) ಜ್ವರ ಸಹಿತ ಮೈಬೇನೆ, ಕೆಮ್ಮು ಇದ್ದರೆ-ಬ್ರಾಯೊನಿಯಾ 30x.

(iv) ನೆಗಡಿ ಸಹಿತ ಜ್ವರ—ಎಕೊನಿಟಂ 30x.

(v) ಗ್ರಹಣಿ ಪ್ರಕೃತಿಯ ಮಕ್ಕಳಿಗೆ—ಸಿಲಿಸಿಯಾ 30x.

## 18. ಮೂತ್ರಜನಕಾಂಗದ ರೋಗಗಳು (Diseases of Kidneys)

(i) ಉರಿದು, ಮೂತ್ರವು ಬಿಂದು ಬಿಂದಾಗಿ ಬರುತ್ತಿದ್ದರೆ—ಕೆಂಥಾರಿಸ್ 30x.

(ii) ಮೂತ್ರಪಿಂಡಗಳಲ್ಲಿ ಒತ್ತಿದಂಥಾ ನೋವು—ಟೆರೆಬಿಂತಿನ 30x.

(iii) ಮೂತ್ರದ ಕೊರತೆ–ಏಪಿಸ್ 3x.

(iv) ಜ್ವರವಿದ್ದಲ್ಲಿ–ಎಕೊನಿಟಂ ಮತ್ತು ಕೆಂಥಾರಿಸ್

(v) ಜ್ವರವಿಲ್ಲದಲ್ಲಿ--ನರ್ಕ್ಸವೊಮಿಕಾ ಮತ್ತು ಕೆಂಥಾರಿಸ್ ಕೊಟ್ಟಲ್ಲಿ ಹಿತಕರ.

## 19. ಪಿತ್ತಜನಕಾಂಗದ ರೋಗಗಳು (Diseases of Liver)

(i) ಅರಸಿನ ಮಂಡಿಗೆಗೆ ಮುಖ್ಯ ಔಷಧ--ಮುರ್ಕ್ಯೂರಿಯುಸ್ ಸೊಲ್ಯೂಬಿಲಿಸ್ 6-30x

(ii) ಮಲಬದ್ಧತೆಗೂ, ಶೂಲೆಗೂ--ನರ್ಕ್ಸವೊಮಿಕಾ (i) ಮತ್ತು (ii)ನ್ನು ಬದಲಿಸಿ ಕೊಟ್ಟಲ್ಲಿ ಹಿತಕರ.

(iii) ಪಿತ್ತಜನಕಾಂಗ ಮಂದವಾಗಿದ್ದರೆ--ಪೊಡೋಫೈಲಂ 30x.

(iv) ಮುಕ್ಕಳಿಗೆ--ಕೆಮೊಮಿಲಾ 6-30x.

ಇತರ ಸಹಾಯಕ ಔಷಧಗಳು: (i) ಚೆಲಿಡೋನಿಯಂ (Chelidonium). (ii) ಚೆಯುನಾಂಥಸ್ (Chionanthus).

## 20. ವಿಷಮ ನೆಗಡಿ (Influenza--'Flu)

(i) ಜ್ವರ, ಮೈಬೇನೆ, ನೆಗಡಿ ಇತ್ಯಾದಿಗೆ--ಬ್ರಾಯೋನಿಯಾ 6-30x.

(ii) ಅಶಕ್ತಿ, ಅಜೀರ್ಣವಿದ್ದರೆ–ಆರ್ಸನಿಕಂ 6-30x.

(iii) ಮಲಬದ್ಧತೆಯಿದ್ದರೆ--ನರ್ಕ್ಸವೊಮಿಕಾ 30x.

(iv) ಗುಣವಾಗುವುದಕ್ಕೆ ವಿಳಂಬವಾದರೆ ಮಧ್ಯೆ ಮಧ್ಯೆ--ಸಲ್ಫರ್ 30x.

ಇತರ ಸಹಾಯಕ ಔಷಧಗಳು: ಬೆಪ್ಟಿಸಿಯಾ; ಬೆಲಡೋನಾ ಇನ್‌ಪ್ಲೂಸಿಯಂ (Influenzin). ಕೊಸ್ಟಿಕಂ (Causticum).

## 21. ಕಜ್ಜಿ (Itch)

(i) ಮಲಿನ ಚರ್ಮದಿಂದ ಕಜ್ಜಿ--ಸಲ್ಫರ್ 30x.

(ii) ಕಾಲಿಸಲ್ಫ ಮತ್ತು ನೈಟ್‌ಮ್ಯೂರ್ 6x. ಬದಲಿಸಿ ಬದಲಿಸಿ ತೆಗೆದುಕೊಂಡಲ್ಲಿ ಗುಣಕರ.

(iii) ಬೇಸಗೆಯ ಕಜ್ಜಿ--ಸರಸಪರಿಲ್ಲಾ 30x.

(iv) ತುರಿಸುವ ಕೀವಿಲ್ಲದ ಕಜ್ಜಿಗಳು—ಸ್ಟಪಿಸೆಗ್ರಿಯಾ 30x. (Staphysagria).

(v) ರೆಸಿಕೆಯಿರುವ ಕಜ್ಜಿ--ಗ್ರೆಪ್ಯಾಟ್ಸ್ 30x.

(vi) ಬೆರಳುಗಳ ಮಧ್ಯದಲ್ಲಿ ಕಜ್ಜಿ—ಸೆಲೆನಿಯಂ 30x. (Selenium).

## 22. ಕೋರ (Measles)

(i) ಜ್ವರವಿದ್ದರೆ--ಎಕೊನಿಟಂ 30x.

(ii) ರೋಗದ ಎಲ್ಲಾ ಅವಸ್ಥೆಗಳಲ್ಲಿ ಪಲ್ಸಟಿಲ್ಲಾ. ಮನೆಯಲ್ಲಿರುವವರಿಗೆ ಪಲ್ಸಟಿಲಾ 30x ಕೊಟ್ಟಲ್ಲಿ ರೋಗವು ಹಬ್ಬದು.

ಸಹಾಯಕ ಔಷಧಗಳು: (i) ಜೆಲ್ಸೆಮಿಯಂ ಮತ್ತು ಪೋಸ್‌ಪರಸ್. (ii) ಮೊರ್‌ಬಿಲಿನಂ (Morbilinum).

## 23. ಕೆನ್ನೆಬೀಗು (Mumps)

(i) ಆರಂಭದಲ್ಲಿ—ಮರ್ಕ್ಯೂರಿಯಸ್ ಸೋಲ್—30x.

(ii) ಅನಂತರ—ಕೆಂಪು ಹೆಚ್ಚಿದ್ದರೆ-ಬೆಲಡೋನಾ 30x.

ಮೇಲಿನ ಎರಡು ಔಷಧಿಗಳನ್ನು ಬದಲಿಸಿ ಬದಲಿಸಿ ಕೊಡುವುದು.

## 24. ಮೂಲವ್ಯಾಧಿ (Piles)

(i) ರಾತ್ರಿ ಒಂದು ಸರ್ತಿ ನಕ್ಸ್‌ವೊಮಿಕಾ 30x ಮತ್ತು ಬೆಳಿಗ್ಗೆ ಒಂದು ಸಲ್ಫರ್-30x—ಕೆಲವು ವಾರದ ವರೆಗೆ.

(ii) ರಕ್ತಸ್ರಾವವಿದ್ದರೆ— ಹೆಮಮೇಲಿಸ್-30x.

(iii) ಹೆಚ್ಚು ತುರಿಕೆಯಿದ್ದರೆ—ರಟೆನೀಯಾ (Ratanhia) ಇತರ ಔಷಧಗಳು — ಲಾಯಕೋಪೊಡಿಯಂ ಮತ್ತು ಕೊಲಿನ್‌ಸೋನಿಯಾ (Collinsonia).

## 25. ಗ್ರಹಣಿ (Rickets)

(i) ದಪ್ಪ ಮೃದು ಮೈಯ ಮಕ್ಕಳಿಗೆ—ಕಲ್ಕೇರಿಯಾಫೋಸ್ 30x.

(ii) ಬೆನ್ನೆಲುಬು ಬಾಗಿ, ಕಿಬ್ಬೊಟ್ಟೆ ಗಂಟುಗಳು ಉಬ್ಬಿದ್ದರೆ—ಕಲ್ಕೆರಿಯಾ ಕಾರ್ಬೊನಿಕಾ 30x.

(iii) ಅಸ್ಥಿಜ್ವರವಿದ್ದರೆ—ಆರ್ಸನಿಕಂ 30x.

(iv) ಸಪೂರ ಮೈ, ಬೆವರುವ ತಲೆ—ಸಿಲೀಸಿಯಾ 30x.

(v) ಚರ್ಮವ್ಯಾಧಿಗಳಿದ್ದರೆ—ಸಲ್ಫರ್ 30x.

## 26. ಗಂಟಲುಬೇನೆ (Sore-Throat)

(i) ಮರ್ಕ್ಯೂರಿಯಸ್‌ಸೋಲ್ ಮತ್ತು ಬೆಲಡೋನಾ 30x. ಸರ್ತಿ ಪ್ರಕಾರ ಬದಲಿಸಿ ತೆಗೆದುಕೊಂಡಲ್ಲಿ ಗುಣಕರ.

## 27. ಉಬ್ಬಸ (Spasmodic Asthma)

(i) ಸಡಿಲು ಶ್ಲೇಷ್ಮದ ಉಬ್ಬಸಕ್ಕೆ— ಇಪ್‌ಕಾಕ್ವಾನಾ 30x.

(ii) ಅಶಕ್ತಿ, ತಣ್ಣಗಾದ ಬೆವರಿಗೆ— ಅರ್ಸನಿಕಂ 30x.

(iii) ಅಜೀರ್ಣದಿಂದಾದರೆ— ನಕ್ಸ್‌ವೊಮಿಕಾ 30x.

(iv) ದೀರ್ಘ ಕಾಲದ್ದಕ್ಕೆ— ಫೋಸ್‌ಫರಸ್ 30x.

ಇತರ ಔಷಧಗಳು— ಬ್ಲಾಟಾ; ಕಾಲಿಬಿಚ್ (Kalibich)

## 28. ಹಲ್ಲು ಬರೋಣ (Teething)

(i) ವಸಡು ಬಾತು ಬಾಲಗ್ರಹ ತಂಟೆಯಿದ್ದರೆ— ಬೆಲಡೋನಾ 30x

(ii) ಜ್ವರವಿದ್ದರೆ—ಎಕೊನಿಟಂ 30x.

(iii) ಹಲ್ಲು ಬರುವುದಕ್ಕೆ ವಿಳಂಬವಾಗಿ, ತೆಳು ಹೊರಕಡೆ ಇದ್ದರೆ—ಕಲ್ಕೇರಿಯಾ ಕಾರ್ಬೋನಿಕಾ 30x

(iv) ಇತರ ಎಲ್ಲಾ ಸಂಗತಿಗಳಲ್ಲಿ—ಕೆಮೊಮಿಲಾ ಹಿತಕರ.

## 29. ಹಲ್ಲುನೋವು (Tooth-ache)

(i) ಮುಖ್ಯ ಔಷಧ—ಕೆಮೊಮಿಲಾ 6-30x

(ii) ಸಿಡಿತ ಮತ್ತು ನೋವು ಇದ್ದರೆ—ಬೆಲಡೋನಾ 30x.

(iii) ಮೋರೆಬಾತು, ಕೀವು ಬರುತ್ತಿದ್ದರೆ— ಮರ್ಕ್ಯೂರಿಯಸ್ ಸೋಲ್ 30x.

(iv) ಚಲನೆಯಿಂದ ಹೆಚ್ಚಾಗುತ್ತಿದ್ದರೆ— ಬ್ರಾಯೋನಿಯಾ 30x.

(v) ತಣ್ಣೀರಿನಿಂದ ಉಪಶಮನವಾಗುವುದು—ಕೋಫಿಯಾ 30x.

## 30. ಜಠರದ ಅಕ್ರಮಗಳು (Stomach disorders)

(i) ಜಠರದ ಆಮ್ಲತೆಗೆ—ಕಾರ್ಬೋವೆಜಿಟೆಬಿಲಿಸ್ 30x.

(ii) ಊಟದ ನಂತರ—ನಕ್ಸ್‌ವೊಮಿಕಾ 30x

(iii) ಊಟದ ನಂತರ ಕಾರುವಿಕೆ—ಇಪೆಕ್ಯಾಕ್ವಾನಾ 30x.

(iv) ವಾಯು ತುಂಬಿ ತೇಗುವುದು—ಲಾಯಕೋಪೋಡಿಯಂ 30x.

(v) ನಾಲಿಗೆಯಲ್ಲಿ ಬಿಳಿ ಅಗ್ರ—ಎಂಟಿಮೋನಿಯಂಕ್ರೂಡ 30x.

(vi) ಬಾಯಿ ರುಚಿಯಿಲ್ಲದಿರುವುದು—ಪಲ್ಸಟಿಲಾ 30x.

(vii) ನೀರು ಕುಡಿದೊಡನೆ ವಾಂತಿ—ಫೋಸ್ ಫರಸ್ 30x.

(viii) ಯಾವ ವಸ್ತು ತೆಗೆದುಕೊಂಡರೂ ವಾಂತಿ—ವಿರಾಟ್ರಮ್ ವಿರೈಡ್-6-30x.

(ix) ಮಕ್ಕಳ ಜಠರದ ಅಕ್ರಮಗಳಿಗೆ—ಕೆಮೊಮಿಲಾ 30x.

## 31. ತಲೆತಿರುಗುವಿಕೆ (Vertigo)

(i) ಸಾಧಾರಣ ತಲೆತಿರುಗುವಿಕೆಗೆ—ಜೆಲ್ಸೆಮಿಯಂ 30x.

(ii) ಮಲಬದ್ಧತೆ, ನಿದ್ರಾಭಂಗ ಕಾರಣ—ನಕ್ಸ್‌ವೊಮಿಕಾ 30x.

(iii) ಅಶಕ್ತಿ, ಕಠಿಣ ತಲೆ ಸಿಡಿತ—ಆರ್ಸೆನಿಕ 30x.

(iv) ಪಿತ್ತವಿಕಾರಗಳಿಂದ—ಬ್ರಾಯೋನಿಯಾ 30x.

## 32. ಕಾರುವಿಕೆ (Vomitting)

(i) ಎಲ್ಲಾ ತರದ ವಾಂತಿಗೆ—ಇಪೆಕ್‌ಕ್ವಾನಾ 6-30x.

(ii) ಹೊಟ್ಟೆ ಕದಲಿಕೆಯಾಗಿ, ನೀರು ಸಹಾ ನಿಲ್ಲದೆ ವಾಂತಿಯಾಗಿ, ಅಶಕ್ತಿ—ಆರ್ಸೆನಿಕಂ 6x.

(iii) ಪಿತ್ತವಿಕಾರದಿಂದ—ನಕ್ಸ್ 6x-30x.

(iv) ಹುಳದ ಉಪದ್ರದಿಂದ—ಸೀನಾ 6x-30x.

(v) ಹೊಟ್ಟೆ ಮಗುಚಿ ಮಗುಚಿ ವಾಂತಿ—ಎಂಟಿಮೊನಿಯಂ ಟಾರ್ಟರಿಕಂ 6x.

(vi) ಯಾವುದನ್ನು ತೆಗೆದುಕೊಂಡರೂ ವಾಂತಿ — ವಿರಾಟ್ರಮ್ ವಿರ್ಡೆಡ್ 6x.

## 33. ನಿದ್ರೆಯಲ್ಲಿ ಮೂತ್ರಸೋಣ (Wetting Bed)

(i) ಮುಖ್ಯ ಔಷಧ—ಕಲ್ಕೇರಿಯಾ ಕಾರ್ಬೋನಿಕಾ 30x.

(ii) ರಾತ್ರಿಯಲ್ಲಿ ನಿದ್ರೆಯಲ್ಲಿ ಮೂತ್ರಿಸುವುದು—ಬೆಲಡೊನಾ 30x

(iii) ಹುಳದ ದೆಸೆಯಿಂದ—ಸೀನಾ 30x.

(iv) ನರಗಳ ದುರ್ಬಲತೆ ಕಾರಣ—ಕಾಲಿಫೋಸ್ 6x.

## 34. ಹುಳ (Worms)

(i) ಹುಳದ ಉಪದ್ರದಿಂದ ವಾಂತಿ, ಜ್ವರ, ಹೊರಕಡೆ—ಸೀನಾ 6-30x.

(ii) ದೀರ್ಘ ಕಾಲದ ರೋಗಕ್ಕೆ—ಸಲ್ಫರ್ 30x ಮತ್ತು ಕಲ್ಕೇರಿಯಾ ಕಾರ್ಬೋನಿಕಾ—ವಾರಕ್ಕೊಂದಾವರ್ತಿ.

(iii) ಹುಳದ ಉಪದ್ರದಿಂದ ರಾತ್ರಿ ಫಕ್ಕನೆ ಚೀರುವುದು, ಕೂಗುವುದು—ಬೆಲಡೋನಾ 30x.

ಇತರ ಔಷಧಗಳು—ಚೆನೊಪೋಡಿಯಂ; ಸಾಂಟೋನೈನ್; ಸ್ಪಿಜಿಲಿಯಾ; ಮರ್ಕ್ಯೂರಿಯಸ್‌ಸೋಲ್.

35. ನಾಯಿಕೆಮ್ಮು (Whooping Cough)

(i) ಡ್ರೊಸಿರಾ 6-30x—ಮುಖ್ಯ ಔಷಧ.

(ii) ಪ್ರಾರಂಭದಲ್ಲಿ—ಬೆಲಡೋನಾ ಮತ್ತು ಹಿಪರ್‌ಸಲ್ಫ್ಯೂರಿಸ್ 6-30x. ಅನಂತರ ಡ್ರೊಸಿರಾ ಮತ್ತು ಇಪೆಕ್ಯಾಕ್ವಾನಾ—ತದನಂತರ ಪಲ್ಸಟಿಲಾ ಮತ್ತು ಸಲ್ಫರ್—ಕೊಟ್ಟಲ್ಲಿ ಹಿತಕರ.

## B. ಸ್ತ್ರೀಯರ ಕಾಯಿಲೆಗಳು

### 1. ಮಾಸಿಕ ಸೂತಿಕದ ತಡೆ (Suppressed Menstruation)

(i) ಮೃದುಸ್ವಭಾವದ ಕೋಮಲ ಹೆಂಗಸರಿಗೆ—ಪಲ್ಸಟಿಲಾ 30x.

(ii) ಅಶಕ್ತಿ, ನಿಶ್ಪ್ರಾಣದ, ರಕ್ತಛಾಯೆಯಿಲ್ಲದೆ ಇರುವವರಿಗೆ—ಸೇಫಿಯಾ 30x.

(iii) ಹೊಟ್ಟೆನೋವು ಇದ್ದರೆ—ಕಾಲೋಫೈಲಂ 30x.

ಇತರ ಸಹಾಯಕ ಔಷಧಗಳು—

( i ) ಅಬ್ರೋಮಾ ಅಗಸ್ಟಾ (Abroma-aug)

( ii ) ಕೆಮೊಮಿಲಾ.

(iii) ಜೊನೋಸಿಯಾ ಅಶೋಕಾ (Jonosia Asoka)

### 2. ಸೂತಿಕದ ಅತಿಸ್ರಾವ (Profuse-Menstruation)

(i) ಗಡುವಿನ ಮುಂಚೆ ಮುಟ್ಟಾಗಿ ಲೈಂಗಿಕ ಉತ್ತೇಜನ ಹೆಚ್ಚಿರುವವರಿಗೆ—ಪ್ಲೆಟಿನಾ-30x.

(ii) ವಿಪರೀತ ಸ್ರಾವ ಮತ್ತು ಅಶಕ್ತಿಗೆ—ಚಯಿನಾ 30x.

ಇದನ್ನೆ ಮುಟ್ಟಿನ ನಡುವಿನ ಕಾಲದಲ್ಲಿ ಕೊಟ್ಟರೆ ಹೆಚ್ಚಿನ ಗುಣ.

ಇತರ ಸಹಾಯಕ ಔಷಧಗಳು—1) ಬೆಲಡೋನಾ
2) ಕೆಮೊಮಿಲಾ
3) ಕಲ್ಕೇರಿಯಾಕಾರ್ಬೋನಿಕಾ
4) ಪಲ್ಸಟಿಲಾ.

### 3. ಬೇನೆ ಸಹಿತ ಮುಟ್ಟು (Painful Menstruation)

(i) ಗರ್ಭಕೋಶದ ಸೆಟಬೇನೆಗೆ—ಕೂಪ್ರಮ್ ಮೆಟಾಲಿಕಂ 30x.
(ii) ತೀವ್ರ ಪ್ರಸವವೇದನೆಯಂಥಾ ಬೇನೆ—ಕೆಮೊಮಿಲಾ 30x.
(iii) ತಲೆಸಿಡಿತದ ಮುಟ್ಟು ಬೇನೆ—ಜೆಲ್ಸೆಮಿಯಂ 30x
(iv) ವಾತಪ್ರಕೃತಿಯ ಸ್ತ್ರೀಯರ ಬೇನೆಗೆ—ಸಿಮಿಸಿಫ್ಯೂಗಾ 30x.
ಇತರ ಸಹಾಯಕ ಔಷಧಗಳು—(i) ಬೆಲಡೋನಾ
(ii) ಪಲ್ಸಟಿಲಾ
(iii) ಕೊಕ್ಯೂಲಸ್.

### 4. ಬಿಳಿಸ್ರಾವ (Leucorrhoea)

(i) ಎಲ್ಲಾ ಸಂಗತಿಗಳಲ್ಲಿ ಕಲ್ಕೇರಿಯಾ 30x ಮತ್ತು ಪಲ್ಸಟಿಲಾ 30x—ಸರ್ತಿ ಪ್ರಕಾರ ಬದಲಿಸಿ ಕೊಟ್ಟಲ್ಲಿ ಗುಣ.
(ii) ಹಳದಿ ಬಣ್ಣದ ಬಿಳುಪು ಹೋದರೆ—ಸೇಫಿಯಾ 30x.
(iii) ರಾತ್ರಿ ಹೆಚ್ಚು—ಅಂಬ್ರಾ 30x.
(iv) ಹಗಲು ಹೆಚ್ಚು—ಅಲ್ಯೂಮಿನಾ 30x.
ಇತರ ಸಹಾಯಕ ಔಷಧಗಳು—(1) ಜೈನಾ 30x.
(2) ಕ್ರಿಯಾಸೋಟಂ (ತುರಿಕೆಗೆ)

### 5. ಸೂತಿಕೆವಾಯು (Hysterics)

(i) ಮುಖ್ಯ ಔಷಧ—ಇಗ್ನಾಸಿಯಾ 6-30x.
(ii) ಮಲಬದ್ಧತೆಯಿದ್ದರೆ—ನರ್ಕ್ಸ್
(iii) ಮುಟ್ಟು ತಡೆಯಾಗಿದ್ದರೆ—ಪಲ್ಸಟಿಲಾ 30x.
(iv) ಸೂತಿಕಾ ಅಪಸ್ಮಾರಕ್ಕೆ—ಕಲ್ಕೇರಿಯಾ ಕಾರ್ಬೋನಿಕಾ 30x

(v) ಕುತ್ತಿಗೆ ನರ ಬಾತು, ಮುಖ ಕೆಂಪೇರಿದರೆ—ಬೆಲಡೋನಾ 6-30x.

ಇತರ ಸಹಾಯುಕ ಔಷಧಗಳು:—ಚಯಿನಾ, ಕೆಮೊಮಿಲಾ.

**6. ರಕ್ತವಾಹಿನಿಗಳ ಉಬ್ಬೋಣ (Varicose Veins)**

(ಗರ್ಭಿಣಿಯರ ಕಾಲಿನ ರಕ್ತವಾಹಿನಿಗಳು ಅನೇಕ ಸಾರಿ ಉಬ್ಬುವುದುಂಟು)

1) ಮುಖ್ಯ ಔಷಧ—ಪಲ್ಸಟಿಲಾ 6x.

2) ಮಲಬದ್ಧತೆಯಿದ್ದರೆ—ನಕ್ಸ 30x.

3) ನರಗಳ ಉರಿಬೇನೆಗೆ—ಕಾರ್ಬೋವೆಜಿಟಬಿಲಿಸ್ 30x.

4) ಕಠಿಣ ಸಂಗ್ತಿಗಳಲ್ಲಿ ಹೆಮೆಮೆಲಿಸ'. ಹೊಟ್ಟೆಗೆ:-(ಅದರ ದ್ರಾವಕದಿಂದ ಕಾಲುತೊಳೆಯುವುದು.

**7. ಗರ್ಭಿಣಿಯರ ವಾಕರಿಕೆ (Morning Sickness).**

(i) ಹೊಟ್ಟೆ ಕದಲಿಕೆ, ಜೀರ್ಣವಾಗದ ಪದಾರ್ಥಗಳ ವಾಕರಿಕೆಗೆ—ಇಪೆಕ್ಯಾನಾ 30x.

(ii) ಮಲಬದ್ಧತೆ-ವಾಂತಿ-ತಲೆತಿರುಗುವುದು:—ನಕ್ಸ 30x.

(iii) ಉಂಡ ಯಾ ಕುಡಿದ ನಂತರ ವಾಂತಿ-ಅಶಕ್ತಿ:—ಆರ್ಸನಿಕಂ 30x ಮತ್ತು ಪಲ್ಸಟಿಲಾ 30x—ಬದಲಿಸಿಕೊಡುವುದು.

**8. ಗರ್ಭಪತನ (Miscarriage).**

(i) ಇಪೆಕ್ಯಾನಾ ಮತ್ತು ಸಿಕೇಲ್ 6-30x—ಬದಲಿಸಿ ಬದಲಿಸಿ ಕೊಟ್ಟಲ್ಲಿ ಹಿತಕರ.

(ii) ಬಹಳ ನಿತ್ರಾಣವಿದ್ದರೆ—ಅನಂತರ ಚಯಿನಾ 30x.

ಇತರ ಸಹಾಯುಕ ಔಷಧಗಳು—ಸೆಬಿನಾ 30x, ವಾಯಿಕೋಪೋಡಿಯು ಕಲ್ಕೇರಿಯಾ 30x.

**9. ಪ್ರಸವವೇದನೆ (Labour Pains).**

(i) ಮುಖ್ಯ ಔಷಧ—ಬೆಲಡೋನಾ 6-30x.

(ii) ಬೇನೆ ಬಹಳವಿದ್ದರೆ—ಕೋಫಿಯಾ 30x.

(iii) ಗರ್ಭವಾಯುವಿನ ತಂಟೆಯಿದ್ದರೆ- ಇಗ್ನಾಷಿಯಾ 6-30x. ಇತರ ಔಷಧಗಳು—ಪಲ್ಸಟಿಲಾ, ಜೆಲ್ಸಿಮಿಯಂ.

(iv) ಆರ್ನಿಕವನ್ನು ಹೆತ್ತು ಕಸಹೋದ ಮೇಲೆ ಕೊಟ್ಟಲ್ಲಿ ಹಿತಕರ. ಸ್ರಾವ ಹೆಚ್ಚಾಗದು.

**10. ಬಾಣಂತಿ ಜ್ವರ (Puer Peral-Fever)**

(i) ಪ್ರಥಮ ಜ್ವರ ಬಂದ ಕೂಡಲೆ—ಎಕೊನಿಟಂ 6x.

ಹಾಲಾಗುವ ಜ್ವರಕ್ಕೂ ಇದೊಂದೇ ಸಾಕು.

(ii) ಸ್ತನಗಳಲ್ಲಿ, ಎದೆಯಲ್ಲಿ ನೋವು-ಬೀಗು ಇದ್ದರೆ—ಬ್ರಾಯೋನಿಯಾ 30x.

ಇತರ ಸಹಾಯಕ ಔಷಧಗಳು— ಗ್ಲೂಸ್; ಬೆಲಡೋನಾ.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1956ನೇ ಜೂನ್ ತಿಂಗಳ ನಾಲ್ಕನೇ ವಾರದ ವರೆಗೆ 93 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

93 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 1996 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ-ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಈ ವರೆಗೆ ಪ್ರಕಟವಾದ ಪುಸ್ತಕಗಳ ಹೆಸರುಗಳನ್ನು ಈ ಪುಸ್ತಕದ ಹೊದಿಕೆಯ ಎರಡನೇ ಪುಟದಲ್ಲಿ ನೋಡಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

Edited, Printed & Published by K. V. Shenoy
at The Prabhat Printers, Ltd., Mangalore.